ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಶುಕ್ರವಾರ, ದಿನಾಂಕ : 06 ನೇ ಮಾರ್ಚ್, 2020

ಬೀದರ್ ಜಿಲ್ಲೆಯಲ್ಲಿ ಪ್ರವಾಸೋದ್ಯಮವನ್ನು ಅಭಿವೃದ್ಧಿಗೊಳಿಸುವ ಕುರಿತು

ಶ್ರೀ ಅರವಿಂದಕುಮಾರ್ ಅರಳಿ (ವಿಧಾನಸಭೆಯಿಂದ ಚುನಾಯಿತರಾದವರು):-

263 (342) ಮಾನ್ಯ ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಬೀದರ್ ಜಿಲ್ಲೆಯ ಮಾಡೆಲ್ ಟೂರಿಸ್ಟ್ ಡೆಸ್ಟಿನೇಷನ್ (Model Tourist Destination) ಪ್ರವಾಸಿ ತಾಣ ಯೋಜನೆಯಡಿಯಲ್ಲಿ 2016ಕ್ಕೆ ಸರ್ಕಾರದಿಂದ ಕೇಂದ್ರ ಸರ್ಕಾರಕ್ಕೆ ಸಲ್ಲಿಕೆಯಾದ ಪ್ರಸ್ತಾವನೆ ಯಾವ ಹಂತದಲ್ಲಿದೆ ; ಅದಕ್ಕಾಗಿ ರಾಜ್ಯ ಸರ್ಕಾರ ಮಾಡಿರುವ ಪ್ರಯತ್ನವೇನು ; ಈ ಯೋಜನೆಯನ್ನು ಮಂಜೂರು ಮಾಡುವಲ್ಲಿ ತೆಗೆದುಕೊಂಡ ಕ್ರಮವೇನು ;

(ಆ) ಬೀದರ್ ಜಿಲ್ಲೆಯು ಸ್ವದೇಶ ದರ್ಶನ ಯೋಜನೆಯಡಿಯಲ್ಲಿ 2016ರಲ್ಲಿ ಟೂರಿಸಮ್ ಸರ್ಕ್ಯೂಟ್ (Bidar, Basavakalyan, Kalaburagi, Vijayapura, Badami, Ihole, Pattadakallu ) ಇವುಗಳ ಮಧ್ಯೆ ರಾಯಲ್ ಡೆಕ್ಕನ್ ಟೂರಿಸಮ್ ಸರ್ಕ್ಯೂಟ್ ಅಭಿವೃದ್ಧಿಗೋಸ್ಕರ ಕೇಂದ್ರ ಸರ್ಕಾರಕ್ಕೆ ಸಲ್ಲಿಸಿದ ಸಮಗ್ರ ವರದಿ/ಪ್ರಸ್ತಾವನೆ ಯಾವ ಹಂತದಲ್ಲಿದೆ; ಇದನ್ನು ಜಾರಿ ಮಾಡಲು ಸರ್ಕಾರ ಕೈಗೊಂಡ ಕ್ರಮವೇನು ;

(ಇ) ಬೀದರ್ ಜಿಲ್ಲೆಗೆ  ಕೇಂದ್ರ ಸರ್ಕಾರದ ಪ್ರವಾಸದ ಯೋಜನೆಯಡಿಯಲ್ಲಿ ಈಗಾಗಲೇ ಕೇಂದ್ರ ಸರ್ಕಾರಕ್ಕೆ ಸಲ್ಲಿಸಲಾಗಿರುವ ಪ್ರಸ್ತಾವನೆ ಯಾವ ಹಂತದಲ್ಲಿದೆ ; ಅದನ್ನು ಜಾರಿಗೊಳಿಸುವ ಉದ್ದೇಶ ಸರ್ಕಾರದ ಮುಂದಿದೆಯೇ ;

(ಈ) ಬೀದರ್ ಜಿಲ್ಲೆಯು ವಿಶ್ವ ಪಾರಂಪಾರಿಕ ತಾಣ ಸೀರಿಯಲ್ ನಾಮಿನೇಷನ್‌ನಲ್ಲಿ ಆಯ್ಕೆಯಾಗಿದ್ದು, ಅದಕ್ಕೆ ಬೇಕಾದಂತಹ ವರದಿಯನ್ನು ರಾಜ್ಯ ಸರ್ಕಾರ ಕೇಂದ್ರ ಸರ್ಕಾರಕ್ಕೆ ಸಲ್ಲಿಸಬೇಕಾಗಿದ್ದು, ಈ ವರದಿಯನ್ನು ಕೇಂದ್ರ ಸರ್ಕಾರಕ್ಕೆ ಸಲ್ಲಿಸಲಾಗಿದೆಯೇ ; ಸಲ್ಲಿಸದಿದ್ದಲ್ಲಿ, ಇದಕ್ಕೆ ಕಾರಣವೇನು ?